# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 371
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೆಗ್ಗಡದೇವನ ಕೋಟೆಯಿಂದ ನೂತನ ತಾಲ್ಲೂಕು ಕೇಂದ್ರವಾದ ಸರಗೂರಿಗೆ, ಸರಗೂರಿನಿಂದ ಹೆಚ್.ಡಿ.ಕೋಟೆಗೆ ಇರುವ ಸಾರಿಗೆ ಬಸ್‌ಗಳ ಸೌಲಭ್ಯವನ್ನು ಹೆಚ್ಚಳ ಮಾಡಲು ಕ್ರಮ ಜರುಗಿಸಲಾಗುವುದೇ; | ಸರಗೂರು ತಾಲ್ಲೂಕಿಗೆ ಪ್ರಸ್ತುತ ಹೆಚ್.ಡಿ.ಕೋಟೆ ಘಟಕದಿಂದ ಸಾರ್ವಜನಿಕ ಪ್ರಯಾಣಿಕರ ಅವಶ್ಯಕತೆಗೆ ಅನುಗುಣವಾಗಿ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಹೆಚ್ಚುವರಿ ಸಾರಿಗೆಗಳನ್ನು ಕಾರ್ಯಾಚರಿಸುವ ಅಗತ್ಯತೆ ಬಗ್ಗೆ ಪರಿಶೀಲಿಸಲಾಗುತ್ತದೆ. |
| ಆ) | ಸರಗೂರಿಗೆ ಅನೇಕ ಕಡೆಗಳಿಂದ ಬಸ್ ಬಂದರೂ, ಎಲ್ಲಾ ಬಸ್‌ಗಳೂ ಭರ್ತಿಯಾಗಿರುವುದರಿಂದ ಸರಗೂರಿನಲ್ಲಿ ಸಾರ್ವಜನಿಕರು, ವಿದ್ಯಾರ್ಥಿಗಳು ಬಸ್ ಹತ್ತಲು ಸಾಧ್ಯವಾಗದ ಕಾರಣ ಸಾರಿಗೆ ವ್ಯವಸ್ಥೆಯಿಂದ ವಂಚಿತರಾಗಿದ್ದು, ಹೆಚ್.ಡಿ.ಕೋಟೆ ಡಿಪೋದಿಂದಲೇ ಸರಗೂರಿಗೆ ಬಸ್ ಸೌಲಭ್ಯ ಕಲ್ಪಿಸಲಾಗುವುದೇ; | ಪ್ರಸ್ತುತ ಹೆಚ್.ಡಿ.ಕೋಟೆಯಿಂದ ಸರಗೂರಿಗೆ ಹಾಗೂ ಸರಗೂರಿನಿಂದ ಹೆಚ್.ಡಿ.ಕೋಟೆಗೆ 66 ಸುತ್ತುವಳಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ. ಈ ಪೈಕಿ ಹೆಚ್.ಡಿ.ಕೋಟೆ ಘಟಕದಿಂದಲೇ 54 ಸುತ್ತುವಳಿಗಳು ಕಾರ್ಯಾಚರಣೆಯಾಗುತ್ತಿವೆ. ಪ್ರಸ್ತುತ ಸದರಿ ಮಾರ್ಗದಲ್ಲಿ ಅಗತ್ಯಕ್ಕನುಗುಣವಾಗಿ ಸಾರಿಗೆ ಕಾರ್ಯಾಚರಣೆ ಮಾಡಲಾಗುತ್ತಿದ್ದು, ಸಮರ್ಪಕವಾಗಿರುತ್ತದೆ. |
| ಇ) | ಚೆನ್ನಗುಂಡಿ ಗ್ರಾಮದಿಂದ ಸರಗೂರು, ಹೆಚ್.ಡಿ.ಕೋಟೆಗೆ ನೇರ ಬಸ್ ಸೌಲಭ್ಯ ಇಲ್ಲದೆ ತೊಂದರೆ ಆಗಿದ್ದು, ಹೆಡಿಯಾಲಕ್ಕೆ ಬಂದು ಬಸ್ ಹತ್ತಬೇಕಾದ ಪರಿಸ್ಥಿತಿ ಇರುವುದರಿಂದ, ಚೆನ್ನಗುಂಡಿಯಿಂದ ಸರಗೂರು, ಹೆಚ್.ಡಿ.ಕೋಟೆಗೆ ನೇರ ಬಸ್ ಸೌಲಭ್ಯ ಕಲ್ಪಿಸಲಾಗುವುದೇ? | ಚೆನ್ನಗುಂಡಿ ಗ್ರಾಮವು ಹೆಡಿಯಾಲ-ಕಾಡುಬೇಗೂರು ಮಾರ್ಗ ಮಧ್ಯೆಯ ಮುಖ್ಯರಸ್ತೆಯಿಂದ 3 ಕಿ.ಮೀ ಒಳಗಡೆ ಇರುತ್ತದೆ. ಪ್ರಸ್ತುತ ಕಾಡುಬೇಗೂರಿನಿಂದ ಸರಗೂರಿಗೆ ಕಾರ್ಯಾಚರಣೆಯಾಗುತ್ತಿರುವ ಸಾರಿಗೆಯನ್ನು ಚೆನ್ನಗುಂಡಿಗೆ ವಿಸ್ತರಿಸುವ ಅಥವಾ ನೂತನವಾಗಿ ಚೆನ್ನಗುಂಡಿಯಿಂದ ಸರಗೂರಿಗೆ ಸಾರಿಗೆಗಳನ್ನು ಕಾರ್ಯಾಚರಣೆ ಮಾಡುವ ಬಗ್ಗೆ ಪರಿಶೀಲಿಸಲಾಗುತ್ತದೆ. |

ಸಂಖ್ಯೆ: ಟಿಡಿ 45 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು